## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1627

ಸದಸ್ಯರ ಹೆಸರು : ಶ್ರೀ ಸಿ.ಎಂ. ಇಬ್ರಾಹಿಂ (ವಿಧಾನಸಭಾ ಕ್ಷೇತ್ರದಿಂದ ಚುನಾಯಿತರಾದವರು)

ಉತ್ತರಿಸಬೇಕಾದ ದಿನಾಂಕ : 18.03.2021

ಉತ್ತರಿಸಬೇಕಾದ ಸಚಿವರು : ಮಾನ್ಯ ಮುಖ್ಯಮಂತ್ರಿರವರು

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ವತಿಯಿಂದ ಕೈಗೊಂಡಿರುವ ಅರ್ಕಾವತಿ ಬಡಾವಣೆ ನಿರ್ಮಾಣ ಕಾರ್ಯ ಪ್ರಸ್ತುತ ಯಾವ ಹಂತದಲ್ಲಿದೆ: | ಅರ್ಕಾವತಿ ಬಡಾವಣೆಯ ಮೂಲ ಸೌಕರ್ಯ ಒದಗಿಸುವ ಕೆಲಸಗಳು ಪ್ರಗತಿಯಲ್ಲಿರುತ್ತದೆ. ಆರ್‌ಸಿಸಿ ಚರಂಡಿ ನಿರ್ಮಾಣ ಮತ್ತು ರಸ್ತೆಗೆ ಜಲ್ಲಿ ಹಾಕುವ ಕಾಮಗಾರಿ ಪೂರ್ಣಗೊಳ್ಳುವ ಹಂತದಲ್ಲಿದೆ. ಒಳಚರಂಡಿ ಮತ್ತು ಕುಡಿಯುವ ನೀರು ಸರಬರಾಜು ಕಾಮಗಾರಿಯನ್ನು BWSSB ವತಿಯಿಂದಲೇ ಕೈಗೊಳ್ಳಬೇಕಿದ್ದು, ಇವರಿಗೆ ವಿಸ್ತೃತ ಯೋಜನಾ ವರದಿ ತಯಾರಿಸಲು ರೂ.75 ಲಕ್ಷಗಳನ್ನು ಪಾವತಿಸಿರುತ್ತದೆ. ವಿದ್ಯುತ್ ಸಂಪರ್ಕ ಒದಗಿಸಲು ವಿದ್ಯುತ್ ಕಂಬಗಳನ್ನು ಅಳವಡಿಸುವ ಕಾಮಗಾರಿ ಪ್ರಗತಿಯಲ್ಲಿರುತ್ತದೆ. |
| (ಆ) | ಅರ್ಕಾವತಿ ಬಡಾವಣೆಯ ವಿನ್ಯಾಸವನ್ನು ವಿಸ್ತರಿಸಲು ರಾಜ್ಯ ಸರ್ಕಾರವು ಅನುಮತಿ ನೀಡಿದೆಯೇ; ಹಾಗಿದ್ದಲ್ಲಿ ಹೊಸ ವಿನ್ಯಾಸ ವಿಸ್ತರಣೆಯು ಪ್ರಾಥಮಿಕವಾಗಿ ಡಿನೋಟಿಫಿಕೇಷನ್ ಮತ್ತು ಭೂ-ನಷ್ಟದಿಂದಾಗಿ ಸೈಟ್‌ಗಳನ್ನು ಕಳೆದುಕೊಂಡಿರುವ ಹಂಚಿಕೆದಾರರಿಗೆ ಮತ್ತು ರೈತರಿಗೆ ಸಿಗಲಿರುವ ಪ್ರಯೋಜನೆ ಏನು: | ಅರ್ಕಾವತಿ ಮುಂದುವರೆದ ಬಡಾವಣೆ ನಿರ್ಮಾಣಕ್ಕಾಗಿ 450 ಎಕರೆ 15.5 ಗುಂಟೆ ಜಮೀನಿಗೆ ಪ್ರಾಥಮಿಕ ಅಧಿಸೂಚನೆಯನ್ನು ಹೊರಡಿಸಲು ಸರ್ಕಾರದ ಆದೇಶ ಸಂಖ್ಯೆ: ನಅಇ/24/ಬೆಂಭೂಸ್ವಾ/2021 ರಲ್ಲಿ ದಿನಾಂಕ: 24/02/2021 ರಂದು ಬಿಡಿಎ ಕಾಯ್ದೆ 1976 ಕಲಂ 15(3) ರನ್ವಯ ಯೋಜನಾ ಮಂಜೂರಾತಿಯನ್ನು ನೀಡಲಾಗಿರುತ್ತದೆ. ಸದರಿ ಬಡಾವಣೆಗಾಗಿ ಭೂಸ್ವಾಧೀನಪಡಿಸಿಕೊಳ್ಳುವ ವಿಸ್ತೀರ್ಣದ ಜಮೀನುಗಳ ಭೂಮಾಲೀಕರುಗಳಿಗೆ 40:60 ಅನುಪಾತದಲ್ಲಿ ಅಂದರೆ ಅಭಿವೃದ್ಧಿಪಡಿಸಿದ ನಿವೇಶನಗಳನ್ನು (ಪ್ರತಿ ಎಕರೆಗೆ 9583 ಚ.ಅ) ಭೂಪರಿಹಾರವಾಗಿ ನೀಡಲಾಗುವುದು. ಹಾಗೂ ಅರ್ಕಾವತಿ ಬಡಾವಣೆಯಲ್ಲಿ ನಿವೇಶನರಹಿತ ಹಂಚಿಕೆದಾರರಿಗೆ ಹಾಗೂ ಭೂಮಾಲೀಕರಿಗೆ ನಿವೇಶನಗಳನ್ನು ಹಂಚಿಕೆ ಮಾಡಲು ಉದ್ದೇಶಿಸಲಾಗಿರುತ್ತದೆ. |
| (ಇ) | ಸರ್ಕಾರವು ಅರ್ಕಾವತಿ ಬಡಾವಣೆ ನಿರ್ಮಾಣಕ್ಕೆ ಈ ಹಿಂದೆ ಎಷ್ಟು ವಿನ್ಯಾಸಗಳನ್ನು ಅಂಗೀಕರಿಸಿ ಅನುಮತಿ ನೀಡಲಾಗಿತ್ತು; (ಅಂಗೀಕೃತ ವಿನ್ಯಾಸಗಳ ಸಂಪೂರ್ಣ ಮಾಹಿತಿ ಒದಗಿಸುವುದು) ಹಿಂದೆ ಅನುಮತಿಸಿದ ವಿನ್ಯಾಸಕ್ಕೂ ಮಾನ್ಯತೆ ಇರುತ್ತದೆ: | ಅರ್ಕಾವತಿ ಬಡಾವಣೆ ನಿರ್ಮಾಣಕ್ಕೆ ಸಂಬಂಧಿಸಿದಂತೆ ಒಟ್ಟು 2 ವಿನ್ಯಾಸಗಳನ್ನು ಅಂಗೀಕರಿಸಿ ಅನುಮೋದನೆ ನೀಡಲಾಗಿದ್ದು, ವಿವರಗಳು ಕೆಳಕಂಡಂತಿರುತ್ತದೆ:<br>1) ಅರ್ಕಾವತಿ ಬಡಾವಣೆ ನಿರ್ಮಾಣಕ್ಕಾಗಿ ಪ್ರಾರಂಭದ ಹಂತದಲ್ಲಿ ಅಂದರೆ 2004 ರಲ್ಲಿ ಯೋಜನಾ ನಕ್ಷೆಯು ಅನುಮೋದನೆಯಾಗಿರುತ್ತದೆ.<br>2) ಅರ್ಕಾವತಿ ಬಡಾವಣೆ ನಿರ್ಮಾಣಕ್ಕೆ ಸಂಬಂಧಿಸಿದಂತೆ ಕಾರ್ಯಕಾರಿ ಬಡಾವಣೆ ನಕ್ಷೆಯು ದಿನಾಂಕ:21/03/2014 ರಂದು ಅನುಮೋದನೆಯಾಗಿರುತ್ತದೆ. |

...2

| | | |
|---|---|---|
| ಈ) | ಬಡಾವಣೆ ಕಾಮಗಾರಿಯನ್ನು ಸಂಪೂರ್ಣಗೊಳಿಸಲು ಸರ್ಕಾರವು ಕಾಲಮಿತಿ ನಿಗದಿ ಮಾಡಿದೆಯೇ? | ಬಡಾವಣೆಯ ವಿದ್ಯುತ್ ಸಂಪರ್ಕ, ಒಳಚರಂಡಿ ಮತ್ತು ಕುಡಿಯುವ ನೀರು ಸಂಪರ್ಕ ಹಾಗೂ ಡಾಂಬರೀಕರಣ ಕಾಮಗಾರಿಯನ್ನು ಆದ್ಯತೆಯ ಮೇರೆಗೆ ಪೂರ್ಣಗೊಳಿಸಲು ಕ್ರಮ ಕೈಗೊಳ್ಳಲಾಗುತ್ತಿದೆ. |

ಸಂಖ್ಯೆ: ನಅಇ 52 ಬೆಂಭೂಸ್ವಾ 2021

(ಬಿ.ಎಸ್. ಯಡಿಯೂರಪ್ಪ)
ಮುಖ್ಯಮಂತ್ರಿ